# 18. ಮನೆವಾರ್ತೆ ಹಾಡು

ಹೊತ್ತಾರೆ ಎದ್ದು ನಾ ಶ್ರೀಕೃಷ್ಣನ ನೆನೆವೆನು ॥
ಭಕ್ತವತ್ಸಲ ನಿನ್ನ ಅರಮನೆ ಕೆಲಸವ ॥
ಭಕ್ತಿಯಿಂದ ಮಾಡತೊಡಗೂವೆ ॥1॥

ಉದಯಕಾಲದೆದ್ದು ಪದುಮನಾಭನ ನೆನೆದು ।
ಗರುಡವಾಹನ ನಿಮ್ಮ ಅರಮನೆ ಕೆಲಸವ ।
ಮುದದಿ ಮಾಡತೊಡಗೂವೆ । ॥2॥

ಸಂಕರ್ಷಣ ವಾಸುದೇವ ಪ್ರದ್ಯುಮ್ನ ಅನಿರುದ್ಧ ।
ಇವರು ವಾಸವಾಗಿರುವ ಅರಮನೆ ಕೆಲಸವ ।
ದಾಸಿಯಾಗಿ ಬಂದು ಸುಖದಲಿಷ್ಟೇ ॥3॥

ಉಪ್ಪರಿಗೆ ಸಾರಿಸಿ ಮತ್ತೆ ಕಾರಣಗೊಂಡು ।
ಅಷ್ಟಮುತ್ತಿನ ರಂಗವಲ್ಲಿ ಯನೆ ಹಾಕಿ ನಾ ।
ಅಚ್ಚುತನ ಚರಣಕ್ಕೆ ಎರಗೂವೆ ॥4॥

ಪಂಕಜನಾಭನಾ ಮನೆಬಿಂಕ ಬೃಂದಾವನಕೆ ।
ಶಂಖಚಕ್ರಗದಾ ಪದ್ಮವನೆ ಇಟ್ಟುನಾ ।
ಪಂಚವರ್ಣದ ಗಿಳಿಯ ರಚಿಸೂವೆ ॥5॥

ನೂರೆಂಟು ಕೋಟಿ ಅರಮನೆ ಉಪಕರಣೆಯ ।
ತೊಳೆದು ಮನೆವಾರ್ತೆ ಮಾಡಿನಾ ।
ನರಹರಿಯ ಚರಣಕ್ಕೆ ಎರಗೂವೆ ॥6॥

ಕಂಚು ಕಲಾಯದ ಪಾತ್ರೆ ಪಂಚಲೋಹದ ಪಾತ್ರೆ ।
ಸಂಕರ್ಷಣ ಮೂರ್ತಿ ಸವಿಪಾಕದ ಪಾತ್ರೇ ।
ಸಂತೋಷದಿಂದ ತೊಳೆದು ಒಳಗಿಡುವೆ ॥7॥

ಗೋಕುಲದೊಳಗ್ಹುಟ್ಟಿ ಗೋವರ್ಧನಗಿರಿಸೆತ್ತಿದ ।
ಗೋಪಾಲಕೃಷ್ಣನಿಗೆ ಶರಣೆಂದು ನಾನೀಗ ।
ಆಕಳಾ ಕರೆಯುವೆನು ಹರುಷದಲಿ ॥8॥

ಯಾದವರಾಯರಾ ಮನೆ ಹಾಲು ಕಾಸಿಡುವೆನ್ನೇ ।
ಮಾಧವರಾಯರಿಗೆ ಆರೋಗಣೆಯ ಮಾಡಿ ।
ಬೇಡಿದಿಷ್ಟಾರ್ಥ ಕೊಡುವ್ರೋನೆ ॥9॥

ದಧಿಯ ಸುಮದ್ರನ್ನ ಹೃದಯದೊಳಗಿಟ್ಟು ।
ದಧಿಯ ವಾಮನ್ನ ಮನದೊಳಗೆ ಪಾಡುತ್ತ ।
ದಧಿಯ ಕಡೆಯುವೆನೆ ಹರುಷದಲಿ ॥10॥

ಆದ ಬೆಣ್ಣೆಯ ಕಾಸಿ ಘೃತವ ಪಾತ್ರೆಗೆ ಹಾಕಿ ।
ದೇವರ ನೈವೇದ್ಯಕ್ಕಿಟ್ಟು ಮಿಕ್ಕಾದ್ದು ನಾನೀಗ ।
ದೀವಿಗೆ ಹಚ್ಚುವೆ ನರಹರಿಗೆ ॥11॥

ಗಂಗೆ ಉದಕವ ಕಾಸಿ ಕಂಚಿಣ್ಣೆಗಳನ್ನೊತ್ತಿ ।
ಕಂದರಿಗೆ ನೀರೆರೆದು ಮೊಲೆಕೊಟ್ಟು ನಾನೀಗ ।
ಇಂದಿರಾಪತಿಗೆ ಎರಗೂವೆ ॥12॥

ಉಂಡ ಕಂದರಿಗೆ ಎಂಜಲಾ ಕೈ ತೊಳೆದು ।
ಮುಂಜೆರಗ ತಕೊಂಡು ಮೈ ಒರಸಿ ನಾನೀಗ ।
ಅಲಿಗಳಕೆ ಆಡ ಕಳುಹೂವೆ ॥13॥

ಗಂಗೆ ಗೋದಾವರಿ ಸಿಂಧು ಕಾವೇರಿಯಲಿ ।
ಮಿಂದು ಮೈತೊಳೆದು ಹಣೆಗಿಟ್ಟು ನಾನೀಗ ।
ಇಂದಿರಾಪತಿಗೆ ಎರಗೂವೆ ॥14॥

ಪೊಳೆವ ಅರಶಿನ ಹಚ್ಚಿ ನದಿಯೊಳಗೆ ಮೈತೊಳೆದು ।
ಚೆಲುವ ಊರ್ಧ್ವಪುಂಡ್ರಗಂಧ ಕುಂಕುಮವಿಟ್ಟಿ ।
ನರಹರಿಯ ಚರಣಕ್ಕೆ ಎರಗೂವೆ ॥15॥

ಗುರುಗಳು ಕೊಟ್ಟಂಥ ಪರಮ ಮಂತ್ರವ ಜಪಿಸಿ ।
ಒಡನೆ ಪ್ರದಕ್ಷಿಣೆ ನಮಸ್ಕಾರವನೆ ಮಾಡಿ ।
ನರಹರಿಯ ಚರಣಕ್ಕೆ ಎರಗೂವೆ ॥16॥

ಮಂಗಳ ಮಹಿಮನ ಉಂಗುಷ್ಟದಲಿ ಜನಿಸಿದ ।
ಗಂಗೆಯಾ ತಂದು ಹರಿಯಾ ನೈವೇದ್ಯಕ್ಕೆ ।
ಹಂಡೆ ಹಂಡೆಗಳಲ್ಲಿ ಇರಿಸೂವೆ ॥17॥

ಆರತಿ ಕರ್ಪೂರ ನೀರಾಜನಗಳ ತುಂಬಿ ।
ಪರಿಪರಿಪುಷ್ಪ ಮಾಲಿಕೆಗಳನೆ ಕಟ್ಟಿ ।
ನರಹರಿಯ ಪೂಜೆಗೆ ಇರಿಸುವೆ । ॥18॥

ಹಾಗಲ್ಹೀರೀಕಾಯಿ ಬೇಗ ಬೆಂಡೇಕಾಯಿ ।
ಸಾಗರಶಯನನಾ ನೈವೇದ್ಯಕ್ಕಣಿ ಮಾಡಿ ।
ಶಾಕಗಳ ಹಚ್ಚಿ ಇರಿಸೂವೆ ॥19॥

ಪಾಯಸಾ ಭಕ್ಷವೂ ಸೂಪ ಶಾಕನ್ನವೂ ।
ಆಯುತವಾಗಿದ್ದ ಲವಣ ಶಾರಾನ್ನವೂ ।
ದೇವರ ನೈವೇದ್ಯಕ್ಕಿಡುವೇನೇ ॥20॥

ದೇವರ ನೈವೇದ್ಯಕ್ಕಿಟ್ಟು ಬೇಗ ವೈಶ್ವದೇವ ತೆಗೆದು
ಗೋಗ್ರಾಸಕ್ಕೆ ತೆಗೆದು ನಾನೀಗ ।
ಹಸ್ತೋದಕಕ್ಕೆ ಇಡುವೇನೂ ॥21॥

ಅಚ್ಚುತ್ತಾ ಶ್ರೀ ತುಳಸೀಗೆ ಭಕ್ತಿಯಿಂದೆರಗಿ ಪೂಜಿಸಿ ।
ಅಚ್ಚ ಶ್ರೀ ಗಂಧವನ್ನು ಕೊರಳಿಗೆ ಲೇಪಿಸಿ
ಭಕ್ತಿನಾರತೀಯ ಬೆಳಗೂವೆ ॥22॥

ಅಚ್ಚುತಾ ಶ್ರೀ ತುಳಸಿ ಕೊಟ್ಟ ಪ್ರಸಾದವನು ।
ಮುಡಿಯಲ್ಲಿ ಮುಡಿಕೊಂಡು ನಾನೀಗ ।
ಅಚ್ಚುತಾ ಶ್ರೀ ತುಳಸೀಗೆರಗೂವೆ ॥23॥

ಹಿರಿಯರು ಗುರುಗಳೂ ನೆರೆದು ನಾರಾಯಣನ ।
ಪೊಗಳುವ ಪುರಾಣವನು ಕೇಳುವೆನು ।
ಶ್ರೀ ಹರಿಯ ಕೃಪೆಯಿಂದ ನಾನೂ ॥24॥

ಗೌರಿ ಮೊಸರನ್ನವನ್ನು ಹರಿವಾಣದೊಳಗಿಟ್ಟು ।
ಹರಿದಾಸರಿಗೆ ಉಣಲಿಟ್ಟು ನಾನೀಗ
ನರಹರಿಯ ಚರಣಕ್ಕೆ ಎರಗೂವೆ ॥25॥

ಅತ್ತೆ ಮಾವಂದಿರಿಗೆ ಪುತ್ರರಿಗೆ ಮಿತ್ರರಿಗೆ ।
ವಿಷ್ಣುದಾಸರಿಗೆ ಸುಗುಣಿ ಬಾಂಧವರಿಗೆ ।
ಅರ್ಥಿಯಿಂದ ಉಣಲು ಬಡಿಸೂವೆ ॥26॥

ಉಂಡು ಕೈ ತೊಳೆದವರಿಗೇ ತಾಂಬೂಲಗಳ ಕೊಟ್ಟು
ಎಂಜಲಾ ಬಳಿದು ಪತಿ ಉಂಡ ಶೇಷವನು ।
ಭುಂಜಿಪೆನು ಶ್ರೀ ಹರಿಯ ಕೃಪೆಯಿಂದ ॥27॥

ಸಂಜೆಯಾ ಹೊತ್ತಿನಲಿ ದೀಪವನೆ ಹಚ್ಚಿರಿಸುವೆನು ।
ಗೋವುಗಳನೆ ಕರೆದು ಕ್ಷೀರವನೆ ಕಾಸಿ ನಾ ।
ದೇವರ ನೈವೇದ್ಯಕ್ಕಿಡುವೇನೆ ॥28॥

ಸಂಜೆಯಾ ಕಸಬಳಿದು ಉಂಬುವರಿಗುಣಲಿಟ್ಟು ।
ಸಂಭ್ರಮದಿಂದ ಪಡಿಹಾಸಿ ಮಂಚವನು
ಇಂದಿರಾಪತಿಗೆ ಎರಗೂವೆ ॥29॥

"ಪತಿಯಾಂತರ್ಯಾಮಿ ಶ್ರೀ ಪತಿಯೆ ಗತಿಯೆಂದು ।
ಪತಿಯ ಪಾದವನ್ನೊತ್ತಿ ಹರುಷದಲಿ ।
ಕರ್ಪೂರ ವೀಳ್ಯಗಳ ಕೊಡುವೇನು" ॥30॥

ಕ್ಷೀರಸಾಗರದಲ್ಲಿ ಶೇಷನ್ಹಾಸಿಗೆಯಲ್ಲಿ ।
ಶ್ರೀ ಲಕ್ಷ್ಮೀಸಹಿತಾಗಿ ಮಲಗಿರ್ಪ ಹರಿಯನ್ನು ।
ಧ್ಯಾನಿಸುತೆ ಪತಿಯ ಹಾಸಿಗೇಲೆ ಮಲಗೂವೆ ॥31॥

ಯೋಗೀಂದ್ರರಾಯರಾ ಪಾದಕ್ಕೆ ಶರಣೆಂಬೆ ।
ಈ ಧರೆಯೊಳಗೆ ಸಾಧು, ಸಜ್ಜನರಿಗೇ ।
ಬೇಡಿದಿಷ್ಟಾರ್ಥ ಕೊಡುವ್ರೋನೇ ॥32॥

‘‘ನಿತ್ಯ ಈ ಹಾಡು ತಪ್ಪದೇ ಹೇಳಿದವರಿಗೆ ।
ಮುತ್ತೈದೆತನವನ್ನು ಕೊಟ್ಟು ।
ರಕ್ಷಿಸೂವ ನಮ್ಮ ಹಯವದನ’ ॥33॥

‘‘ಯಾವಾಗ ಈ ಹಾಡು ಪ್ರೇಮದೀ ಹೇಳಿ ಕೇಳಿದರೆ ।
ಸಾವಿತ್ರಿತನವನ್ನು ಸಾಯುಜ್ಯ ಪದವಿಯನು ।
ಕೊಟ್ಟು ರಕ್ಷಿಸುವ ನಮ್ಮ ಹಯವದನ’’ ॥34॥

ಶ್ರೀಮದ್ವಾದಿರಾಜತೀರ್ಥರಿಂದ ರಚಿತವಾದ ಮನೆವಾರ್ತೆ ಪದವು ಸಂಪೂರ್ಣವಾಯಿತು

॥ ಶ್ರೀಕೃಷ್ಣಾರ್ಪಣಮಸ್ತು ॥